ಎಸ್. ರಾಜೇಂದ್ರಪ್ಪ*

# 'ಅಮೃತಾಪುರ' ಕೆಲವು ಹೊಸ ಶೋಧಗಳು

ಚಿಕ್ಕಮಗಳೂರು ಜಿಲ್ಲೆ ತರಿಕೆರೆ ತಾಲೂಕಿನ ಅಮೃತಾಪುರ ಹೊಯ್ಸಳರ ಕಾಲದ ಅಮೃತೇಶ್ವರ ದೇವಾಲಯದಿಂದಾಗಿ ಪ್ರಸಿದ್ಧವಾಗಿದೆ. ತರಿಕೆರೆಯಿಂದ ಸುಮಾರು ೧೫ ಕಿ.ಮೀ. ದೂರದಲ್ಲಿರುವ ಈ ಊರು ಹೊಯ್ಸಳ ದಂಡನಾಯಕ ಅಮಿತೆಯ ಚಮೂಪನ ಕಲ್ಪನೆಯ ಕೂಸಾಗಿದ್ದು, ಇಲ್ಲಿನ ಅಮೃತಸಮುದ್ರ ಹಾಗೂ ಅಮೃತೇಶ್ವರ ದೇವಾಲಯಗಳು ಸಾಕಾರಗೊಂಡಿದ್ದು ಅಮಿತ ದಂಡಾಧೀಶನಿಂದಲೇ[1] ಅಮೃತಾಪುರದ ಶಾಸನಗಳಲ್ಲಿ ಅಮಿತಪುರ, ಅಮ್ರಿತಪುರ, ಅಮೃತಪುರ ಎಂದು ಉಲ್ಲೇಖಿತಗೊಂಡಿರುವ ಈ ಊರು ಹಲವಾರು ದೃಷ್ಟಿಯಿಂದ ಮಹತ್ವ ಪಡೆದಿದೆ. ಇಲ್ಲಿನ ಶಾಸನವೊಂದರ ರಚನಕಾರ ಕವಿ ಜನ್ನ[2] ಎಂಬುದೊಂದು ವಿಶೇಷವಾದರೆ, ಅಮೃತೇಶ್ವರ ದೇವಾಲಯದ ಚಿತ್ತಾಕರ್ಷಕ ಅಲಂಕಾರಿಕ ಮೂರ್ತಿ–ಶಿಲ್ಪ ಕೆತ್ತನೆ ಮತ್ತೊಂದು ವಿಶೇಷ. ಹೊಯ್ಸಳರ ಕೆಲವೇ ವಿಶಾಲ ಗುಡಿಗಳಲ್ಲಿ ಒಂದಾದ ಇದರ ಹೊರಭಿತ್ತಿಯ ಮೇಲಿನ ಪೌರಾಣಿಕ ಕೆತ್ತನೆಗಳು ವಿಶಿಷ್ಟವಾಗಿದೆ, ಇಲ್ಲಿನ ಕಾರ್ಯನಾಸಿ ಕತ್ತೆ ಕಾಲು ಹಿಡಿದಿರುವ ವಸುದೇವನ ಕೆತ್ತನೆ[3] ಮಗದೊಂದು ವೈಶಿಷ್ಟ್ಯ. ಈ ದೇವಾಲಯದ ನಿರ್ಮಾಣದಲ್ಲಿ ಭಾಗವಹಿಸಿದ ಶಿಲ್ಪಿಗಳಲ್ಲಿ ಮಲ್ಲಿತಮ್ಮನ ಹೆಸರು ಎದ್ದು ಕಾಣುತ್ತದೆ.

## ಹೊಯ್ಸಳರ ಕಾಲದ ಅಳತೆಕೋಲಿನ ಪ್ರಾತಿನಿಧಿಕ ರೇಖಾ ಕೆತ್ತನೆ

ಪೂರ್ವಾಭಿಮುಖವಾಗಿರುವ ಅಮೃತೇಶ್ವರ ದೇವಾಲಯದ ಸಭಾಮಂಟಪದ ಪ್ರವೇಶಾರಂಭದಲ್ಲೇ ಮಂಟಪದ ಎಡದಂಚಿನ ಕಕ್ಷಾಸನದ ಕೆಳಪಟ್ಟಿಯ ಮೇಲೆ ದಕ್ಷಿಣೋತ್ತರವಾಗಿ ಏಕ ಸಾಲಿನ ಅಪ್ರಕಟಿತ ಶಾಸನವಿದೆ. ಇದರ ಕಾಲವನ್ನು ಸುಮಾರು ಕ್ರಿ.ಶ.೧೨ನೇ ಶತಮಾನಕ್ಕೆ ಗುರುತಿಸಬಹುದು. ಈ ಅಪ್ರಕಟಿತ ಶಾಸನದ ಪಾಠ "ಕೆರೆಯಳತೆಯ ಕೋಲ ಗಡಿಂಬ" ಎಂದಿದೆಯೆಂದು ತೋರುತ್ತದೆ. ಭಾಗಶಃ ಪ್ರಕಟಿತವಾಗಿರುವ ಈ ಶಾಸನವನ್ನು "ಕೆರೆಯಳತೆಯ ಕೋಲ ಗಡಿಂಬ, ಗಳೆಯಳತೆಯ ಕೋಲ ಗಡಿಂಬ ಎಂದೂ ಓದಬಹುದಾದರೂ, ಈ ಮೂರರಲ್ಲಿ 'ಗೆರೆಯಳತೆಯ ಕೋಲ ಗಡಿಂಬ' ಅಥವಾ ಗಳೆಯಳತೆಯ ಕೋಲ ಗಡಿಂಬ ಎಂದೋದುವುದೇ ಹೆಚ್ಚು ಸಮಂಜಸನೆಂದು ತೋರುತ್ತದೆ. ಅಳತೆಕೋಲಿನ ಈ ಪ್ರಾತಿನಿಧಿಕ ರೇಖಾಕೆತ್ತನೆ,

* ಸಂಪಾದಕ, ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

1 ಎ.ಕ. ೬ ತರೀಕೆರೆ ೪೫, ಅಮಿತ ದಂಡನಾಯಕನ ಆದೇಶದಂತೆ ಹೆಗಡೆ ಜಕ್ಕಯ್ಯ ಅತಿಚಂದವಾಗಿ ಮಾಡಿಸಿದನೆಂದು ಈ ಶಾಸನ ಹೇಳುತ್ತದೆ. ಅಲ್ಲದೇ ಗದುಗಿನಲ್ಲೂ ಅಮಿತ ದಂಡಾಧೀಶ ಅಮೃತ ಸಮುದ್ರ ನಿರ್ಮಿಸಿದನೆಂದು ತಿಳಿಸುತ್ತದೆ.

2 ಅದೇ. ಶಾಸನ ಕರ್ತೃ, ಉದ್ದಂಡ ಕವಿ ಭಾಳನೇತ್ರ, ಸುಕವಿ ಜನಮಿತ್ರ ಜನ್ನಯ್ಯನ ಕವಿತೆ; ಲೊಕ್ಕಿಗುಂಡಿ ನಾಗಣ್ಣನ ಬರಹ ; ರೂವಾರಿ ಮಲ್ಲೋಜನ ಕಂಡರಣೆ ಎಂದ ಹೇಳುತ್ತದೆ.

3 ದೇವಾಲಯದ ಸಭಾಮಂಟಪದ ಹೊರಭಿತ್ತಿಯ ಉತ್ತರ ಮುಖದಲ್ಲಿ ಇದನ್ನು ಗಮನಿಸಬಹುದು.

ಹೊಯ್ಸಳರ ಕಾಲಕ್ಕೆ ಸೇರಿದಂತೆ ವರದಿಯಾಗುತ್ತಿರುವ ಎರಡನೆಯ ಉದಾಹರಣೆ. ಮತ್ತೊಂದೆಂದರೆ, ಟಿ. ನರಸೀಪುರ ತಾಲ್ಲೂಕಿನ ಮುಗೂರಿನ[4] ದೇಶೇಶ್ವರ ದೇವಾಲಯದ ಹೊರಭಿತ್ತಿಯಲ್ಲಿರುವ ಉದಾಹರಣೆ. ಮೂಗೂರಿನ ದೇಶೇಶ್ವರದೇವಾಲಯದ ದಕ್ಷಿಣಗೋಡೆಯ ಮೇಲೆ "ಮೂಗೂರ ಭೂಮಿಯಳತೆದ ಗಡಿಂಬ ಪ್ರಮಾಣು" ಎಂದು ಒಂದು ಸಾಲಿನ ಶಾಸನದೊಂದಿಗೆ ೩೫ ಅಂಗುಲ ನೀಳದ ಅಳತೆಗೋಲಿನ ಪ್ರಾತಿನಿಧಿಕ ರೇಖಾ ಕೆತ್ತನೆಯಿದೆ.[5]

ಈ ಹಿನ್ನೆಲೆಯಲ್ಲಿ ಹೊಯ್ಸಳರ ಕಾಲದ ಅಳತೆ ಕೋಲಿನ ಪ್ರಾತಿನಿಧಿಕ ರೇಖಾ ಕೆತ್ತನೆಯನ್ನು ಮೊದಲ ಬಾರಿ ಇಲ್ಲಿ ವಿಸ್ತೃತ ಪ್ರಮಾಣದಲ್ಲಿ ಚರ್ಚೆಗೆ ಒಳಪಡಿಸುವ ಯತ್ನ ಮಾಡಲಾಗಿದೆ. ಅಮೃತಾಪುರದ ಈ ಪ್ರಾತಿನಿಧಿಕ ರೇಖಾಕೆತ್ತನೆ ೬೫ ಅಂಗುಲ (ಐದೂವರೆ ಅಡಿ) ನೀಳವಿದ್ದು, ಅಳತೆಗೋಲಿನ ಎರಡು ತುದಿಯನ್ನು ಬಾಣದ ತುದಿಯನ್ನು ವಿರುದ್ಧ ದಿಕ್ಕಿನಲ್ಲಿ ಕೆತ್ತುವುದರ ಮೂಲಕ ಸೂಚಿಸಲಾಗಿದೆ. ಇದರ ನಡುವೆ ಬಲಭಾಗದಲ್ಲಿ ಮೇಲೆ ಹೇಳಿರುವ ಒಂದು ಸಾಲಿನ ಶಾಸನವಿದೆ. ಅಳತೆಕೋಲಿನ ಮಧ್ಯೆ ೧೬ ಅಂಗುಲ ಅಂತರದಲ್ಲಿ ಎರಡು ಬಾಣ ತುದಿಗಳನ್ನು ಕೆತ್ತಿದ್ದು ಅರ್ಧ ಅಂಗುಲದಿಂದ ೨೨"ದ ವರೆಗೆ ವಿವಿಧ ಪ್ರಮಾಣಗಳನ್ನು ಸೂಚಿಸಲಾಗಿದೆ. ಈ ಅಳತೆಕೋಲು ಆಳುದ್ದ (ಐದೂವರೆ ಅಡಿ) ಇದೆ. ಅಮೃತಾಪುರ[6] ಹಾಗೂ ಮತ್ತಿತರ ಭಾಗದ ಕೆಲವು ಶಾಸನಗಳಲ್ಲಿ[7] ಉಲ್ಲೇಖಿತಗೊಂಡಿರುವ "ಗಂಗನ ಗಳೆಗೂ ಇದಕ್ಕೂ ಏನಾದರೂ ಸಂಬಂಧವಿದೆಯೇ ? ಶಾಸನೋಕ್ತ ಗಂಗನಗಳೆಯೇ ಇದಾಗಿರಬಹುದೆ ? ಎಂಬುದು ಚರ್ಚಾರ್ಹ ವಿಚಾರವಾಗಿದೆ. ಈ ಭಾಗದ ಕೆಲವು ಶಾಸನಗಳಲ್ಲಿ ೪೪ ಮೆಟ್ಟಿನ ಗಳೆ[8] ೧೦ ಮಾರು[9] ೧೩ ಮಾರಿನ ಗಳೆಯ[10] ಉಲ್ಲೇಖವಿದ್ದರೂ, ಇವುಗಳ ನಡುವಿಣ ಸಂಬಂಧ ಸ್ಪಷ್ಟವಾಗುವುದಿಲ್ಲ. ಅಮೃತಾಪುರದ ಶಾಸನದಲ್ಲೇ ಗಂಗನ ಗಳೆಯ ಉಲ್ಲೇಖವಿರುವುದರಿಂದ, ಮೂಲ ಶಾಸನದ ಕೊರತೆ ನೀಗಲು ಪೂರಕವಾಗಿ ಬರೆದ ಶಾಸನದಲ್ಲಿ ಆಗಿರುವುದರಿಂದ ಶಾಸನೋಕ್ತ ಗಂಗನ ಗಳೆಯನ್ನೇ ಇಲ್ಲಿ ಪ್ರಾತಿನಿಧಿಕವಾಗಿ ಕೆತ್ತಿರಬೇಕೆಂದು ತರ್ಕಿಸಿದರೆ ತಪ್ಪಾಗಲಾರದು. ನಮ್ಮ ತರ್ಕವನ್ನು ಒಪ್ಪುವುದಾದರೆ 'ಗಂಗನ ಗಳೆ' ಐದೂವರೆ ಅಡಿ ನೀಳದ ಗಳೆಯಾಗಿತ್ತೆಂದು ಒಪ್ಪಬೇಕಾಗುತ್ತದೆ. ಇಲ್ಲಿ ಸಾಂದರ್ಭಿಕವಾಗಿ ಹಾಸನ ಜಿಲ್ಲೆಯ ರಾಮನಾಥಪುರದ ಕ್ರಿ.ಪೂ. ೧೨೫೧ರ ಶಾಸನ[11]ವನ್ನು ಸ್ಮರಿಸುವುದು ಅಗತ್ಯ. ಇದು ೧೬ ಮೆಟ್ಟಿನ ಹಾಸಗಳೆಯಲಳೆದು ಕೊಂಡು ದಾನಕೊಟ್ಟ ೯೫ ಕಂಬ ತೋಟದ ಕ್ಷೇತ್ರವು ೪೫ × ೩೪ ಪ್ರಮಾಣದ ಆಯಾತಾಕಾರದಲ್ಲಿದ್ದ ಅಂಶವನ್ನು ಸೂಚಿಸುತ್ತದೆ. ಇದರ ಒಟ್ಟು ಕ್ಷೇತ್ರಫಲವನ್ನು ಪತ್ತೆಹಚ್ಚಿ ಲೆಕ್ಕಚಾರ ಹಾಕಿದಾಗ ದಾನ ನೀಡಿದ ಭೂಮಿ ೮.೯೭೫ ಎಕರೆ ಎಂದು ಗೊತ್ತಾಗುತ್ತದೆ. ೧೦೦ ಕಂಭ ಒಂದು ಮತ್ತರಿಗೆ ಸಮ ಎಂದು ಕೆಲವು ಶಾಸನಗಳು[12] ಹೇಳುವುದರಿಂದ, ಈ ಶಾಸನದ ಪ್ರಕಾರ ಒಂದು ಮತ್ತರು

---

4 ಎ.ಕ. ೫ (ಪರಿಷ್ಕೃತ) ತಿ.ನ ೨೬೮

5 Dr. H.S. Usharani (1992) Agrarian System under the Hoysalas ಅಪ್ರಕಟಿತ ಪ್ರೌಢ ಪ್ರಬಂಧ ಮೈ. ವಿ. ವಿ.

6 ಎ.ಕ. ೬ ತರೀಕೆರೆ ೪೩-೯೫

7 ಅದೇ ಕಡೂರು, ೧೪೮; ತರಿಕೇರೆ ೧೯, ೩೬, ೫೯

8 ಎ.ಕ. ೬, ಕಡೂರು ೫೪, ೫೫, ೬೬.

9 ಎ.ಕ. ೬, ತರೀಕೆರೆ ೬೧ ;

10 ಅದೇ ೮೩.

11 ಎ.ಕ. ೮ (ಪರಿಷ್ಕೃತ) ಅರಕಲ ೪೬

12 ಎ.ಕ. ೬ ತರೀಕೆರೆ ೪೫.

ಸುಮಾರು ೯.೪ ಎಕರೆಗೆ ಸಮವಾಗುತ್ತದೆ. ಆದರೆ ಎಲೂಗೆರೆಯ ಕ್ರಿ.ಶ. ೧೨೦೬ರ ಶಾಸನ[13] ೧ ಮತ್ತರು, ೨೦ ಕಂಬಗಳಿಗೆ ಸಮವೆಂದು ಹೇಳುತ್ತದೆ. ಈ ಪ್ರಕಾರ ೧ ಮತ್ತರು ೨.೮ ಎಕರೆಗೆ ಸಮನಾಗುತ್ತದೆ. ಕ್ರಿ.ಶ. ೧೧೨೩ರ ಲಕ್ಷ್ಮೇಶ್ವರದ ಶಾಸನದ[14] ಹಿನ್ನೆಲೆಯಲ್ಲಿ ರಾಮನಾಥಪುರದ ಶಾಸನವನ್ನು ಪರಿಶೀಲಿಸಿದರೆ ೧ ಮತ್ತರು ಸುಮಾರು ೪೦ ಕಂಬಗಳಿಗೆ ಸಮ ಎಂದು ನಿರ್ಣಯಿಸಬೇಕಾಗುತ್ತದೆ. ಇತ್ತೀಚೆಗೆ ಬೇಲೂರಿನ ಚನ್ನಕೇಶವ ದೇವಾಲಯದ ಆಗ್ನೇಯ ದಿಕ್ಕಿನ ಹೊರ ಭಿತ್ತಿಯ ಎರಡನೇ ಅಡ್ಡಪಟ್ಟಿಯ ಮೇಲೆ ದಕ್ಷಿಣೋತ್ತರವಾಗಿ ಸುಮಾರು ೪೦ ಅಂಗುಲ ಉದ್ದದ ಅಳತೆಗೋಲಿನ ಪ್ರಾತಿನಿಧಿಕ ರೇಖಾ ಕೆತ್ತನೆಯನ್ನು ರೇಖಿಸಿ, ಸ್ವಲ್ಪ ಮೇಲೆ 'ದೇವಹಸ್ತದ ಖಂಡೆಯ' ಎಂಬ ಒಂದು ಸಾಲಿನ ಸಂಸ್ಕೃತ ಶಾಸನವನ್ನು ದೇವನಾಗರಿ ಲಿಪಿಯಲ್ಲಿ ಬರೆದಿರುವ ಅಂಶವನ್ನು ಗಮನಿಸಲಾಗಿದ್ದು, ಇಂದಿನ ಒಂದು ಮೀಟರ್‌ಗೆ ಸಮನಾಗಿರುವುದರಿಂದ ಇದರ ಪ್ರಾಚೀನತೆ ಅಷ್ಟೇನೂ ಹಿಂದಕ್ಕೆ ಹೋಗುವುದಿಲ್ಲ. ಈ ಬಗೆಯ ಪ್ರಾತಿನಿಧಿಕ ರೇಖಾ ಕೆತ್ತನೆಗಳ ನೆರವಿನಿಂದ ಹೊಯ್ಸಳರ ಕಾಲದಲ್ಲಿ ಬಳಕೆಯಲ್ಲಿದ್ದ ಭೂಮಾಪನ ಪದ್ಧತಿ, ಭೂಗಾತ್ರಗಳೇ ಮುಂತಾದ ಕೃಷಿ ಕ್ಷೇತ್ರ ಸಂಬಂಧಿ ಅಂಶಗಳನ್ನು ಖಚಿತವಾಗಿ ಅರ್ಥೈಸಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಹೊಯ್ಸಳರ ಕಾಲದ ಶಾಸನಗಳ, ದೇವಾಲಯಗಳ ಪುನರ್ ಅಧ್ಯಯನದ ಅವಶ್ಯಕತೆ ಎದ್ದು ಕಾಣುತ್ತದೆ. ಈ ನಿಟ್ಟಿನಲ್ಲಿ ಅಮೃತಾಪುರದ ಅಳತೆಕೋಲಿನ ಪ್ರಾತಿನಿಧಿಕ ರೇಖಾ ಕೆತ್ತನೆಯ ಈ ಹೊಸ ಶೋಧ ಮಹತ್ವ ಪಡೆಯುತ್ತದೆ.

**ವಿನಾಯಕ ಶಿಲ್ಪ :** ಈ ದೇವಾಲಯದ ಆವರಣದಲ್ಲಿ ಚದುರಿಕೊಂಡಿರುವ ಉಬ್ಬು ಶಿಲ್ಪಗಳಲ್ಲೊಂದನ್ನಿಲ್ಲಿ ಮೊದಲ ಬಾರಿಗೆ ಪ್ರಸ್ತಾಪಿಸಲಾಗುತ್ತಿದೆ. ಈ ಅಪರೂಪದ ಶಿಲ್ಪವನ್ನು ದೇವಾಲಯದ ಪ್ರಾಕಾರದ ಮೇಲ್ಭಾಗವನ್ನು ಅಲಂಕರಿಸುವ ವೃತ್ತಾಕಾರದ ತೆನೆಯಲ್ಲಿ ಕೆತ್ತಲಾಗಿದೆ. ವೃತ್ತಾಕಾರದ ಮಕರ ತೋರಣದ ಹೊರಭಾಗದುದ್ದಕ್ಕೂ ಪ್ರಭೆ ಹೊರ ಹೊಮ್ಮುತ್ತಿದೆ. ಒಳಭಾಗದಲ್ಲಿ ನರ್ತಿಸುತ್ತಿರುವ ದ್ವಿಬಾಹು ವಿನಾಯಕಿಯನ್ನು ಕೆತ್ತಲಾಗಿದೆ. ಶಿಲ್ಪಶಾಸ್ತ್ರದಲ್ಲಿ ಉಲ್ಲೇಖಿಸಲ್ಪಟ್ಟಿರುವ ೬೪ ಶಕ್ತಿ ದೇವತೆಯರಲ್ಲಿ ವಿನಾಯಕಿಯೂ ಒಬ್ಬಳಾಗಿದ್ದು, ಈಕೆಯ ಮೂರ್ತಿಶಿಲ್ಪಗಳು ವಿರಳವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಕರ್ನಾಟಕದಲ್ಲಿ ಈವರೆಗೆ ಇಂತಹ ಶಿಲ್ಪವನ್ನು ಬೇಲೂರು[15] ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ[16] ವಿದ್ವಾಂಸರು ಗಮನಿಸಿರುವುದರಿಂದ, ಅಮೃತಾಪುರದ ಈ ಶೋಧ ಮಹತ್ವದೆನಿಸುತ್ತದೆ. ವಿನಾಯಕನ ಶಕ್ತಿಯೇ ವಿನಾಯಕಿಯಾಗಿದ್ದು, ಇಂತಹ ಶಿಲ್ಪಗಳ ಅಧ್ಯಯನ ಆಗಬೇಕಾಗಿದೆ. ಮೇಲಾಗಿ ಈ ಮೂರ್ತಿ ದ್ವಿಬಾಹುವಾಗಿರುವುದು ಮತ್ತೊಂದು ವಿಶೇಷ ಅಂಶವಾಗಿದೆ.[17]

**ರಾಶಿಚಕ್ರ ಶಿಲ್ಪ :** ಅಮೃತಾಪುರದ ಅಮೃತೇಶ್ವರ ದೇವಾಲಯದ ಆವರಣದಲ್ಲಿ ಗಮನಿಸಿದ ಮತ್ತೊಂದು ಶಿಲ್ಪವೆಂದರೆ "ರಾಶಿ ಚಕ್ರ"ಕಲ್ಲು ಶಿಲ್ಪ. ನವಗ್ರಹಗಳ ಆರಾಧನೆಯಂತೆ ದ್ವಾದಶ ರಾಶಿಗಳ ಆರಾಧನೆಯೂ ಪ್ರಾಚೀನ ಕಾಲದಲ್ಲಿ ಬಳಕೆಯಲ್ಲಿತ್ತೆಂದು ತೋರುತ್ತದೆ. ಇಲ್ಲಿನ ಜನ ಇದನ್ನು ಈಗಲೂ ಮಳೆರಾಯನ ಕಲ್ಲೆಂದು ಭಕ್ತಿಯಿಂದ ಪೂಜಿಸುತ್ತಾರೆ. ವೃತ್ತಾಕಾರದ ಈ ರಾಶಿ ಚಕ್ರದಲ್ಲಿ ಹನ್ನೆರಡೂ ರಾಶಿ ಚಿಹ್ನೆಗಳನ್ನು ಕೆತ್ತಲಾಗಿದೆ. ಈ ರಾಶಿ ಚಿಹ್ನೆ ಕಲ್ಲು ಹಿಂದೆಂದಾದರೂ ದೇವಾಲಯದ ನವರಂಗದಲ್ಲೊಂದರ ಭಾವಣೆಯನ್ನೇನಾದರೂ ಅಲಂಕರಿಸಿತ್ತೋ ಹೇಗೆಂದು ಪರಿಶೀಲಿಸಬೇಕಾಗಿದೆ.

---

13 ಅದೇ ೧೧

14 ಸೌ.ಇಂ.ಇ. ೨೦, ೮೯. ಈ ವಿಷಯದ ಬಗ್ಗೆ ಹೆಚ್ಚಿನ ವಿವರಗಳಿಗೆ ಇದೇ ಸಂಪುಟದ ೧೨೪-೧೨೫ನೋಡಿ (ಸಂ.)

15 ಪ್ರೊ॥ ಕ. ವೆಂ. ರಾಜಗೋಪಾಲ್ ಅವರು ಒದಗಿಸಿದ ಮಾಹಿತಿ

16 ಡಾ॥ ಸುಂದರ ಅವರು ನೀಡಿದ ಮಾಹಿತಿ.

17 ಡಾ. ಸುಂದರ ; ಸತ್ಯ ಶುದ್ಧ ಕಾಯಕ ಸಂ-೧೨, ಸಂಪುಟ ೭೩-೭೬

ಕೃಷಿಪ್ರಧಾನವಾದ ಈ ನಾಡಿನಲ್ಲಿ, ಮಾನವ ಜೀವನದ ಮೇಲೆ ಪ್ರಭಾವದ ಬಗ್ಗೆ ಅಚಲ ನಂಬಿಕೆಯಿರುವ ನಮ್ಮ ಸಮಾಜದಲ್ಲಿ ರಾಶಿಕಲ್ಲುಗಳ ಆರಾಧನೆ ಹಿಂದಿನಿಂದಲೂ ಇತ್ತೆಂದು ತಿಳಿಯುತ್ತದೆ.

ಅಮೃತಾಪುರದಲ್ಲಿ ಇತ್ತೀಚೆಗೆ ಕೈಗೊಂಡ ಕ್ಷೇತ್ರ ಕಾರ್ಯಾವಧಿಯಲ್ಲಿ ಪತ್ತೆಯಾಗಿರುವ ಈ ಶೋಧಗಳು ಅನೇಕ ದೃಷ್ಟಿಯಿಂದ ಮಹತ್ವ ಪಡೆದಿದ್ದು, ಈ ನಿಟ್ಟಿನಲ್ಲಿ ಆಳವಾದ ಅಧ್ಯಯನಕ್ಕೆ ಹೇರಳವಾದ ಅವಕಾಶವಿದೆ.